

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 262 (267) |
| ಮಾನ್ಯ ಸದಸ್ಯರ ಹೆಸರು | ಶ್ರೀಮತಿ ವೀಣಾ ಎಸ್ ಅಚ್ಚಯ್ಯ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 17/02/2022 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ನೋಂದಣಿಯಾಗಿರುವ ಒಟ್ಟು ಕಾರ್ಮಿಕರ ಸಂಖ್ಯೆ ಎಷ್ಟು; | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ ವಿವಿಧ ಮಂಡಳಿಗಳಲ್ಲಿ ಫಲಾನುಭವಿಗಳನ್ನು ನೋಂದಣಿ ಮಾಡಲಾಗುತ್ತಿದೆ. ವಿವಿಧ ಮಂಡಳಿಗಳಲ್ಲಿ ಕೊಡಗು ಜಿಲ್ಲೆಯಲ್ಲಿ ನೋಂದಯಿಸಲಾಗಿರುವ ಕಾರ್ಮಿಕರ ವಿವರಗಳು ಈ ಕೆಳಗಿನಂತಿವೆ.<br><br>**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**<br><br>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ಕೊಡಗು ಜಿಲ್ಲೆಯಲ್ಲಿ 8,700 ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಮಂಡಳಿಯ ಫಲಾನುಭವಿಗಳಾಗಿ ನೋಂದಣಿಯಾಗಿರುತ್ತಾರೆ.<br><br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**<br><br>ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸಲು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಜಾರಿಗೊಳಿಸುತ್ತಿರುವ ವಿವಿಧ ಯೋಜನೆಗಳು ಹಾಗೂ ಕೋವಿಡ್-19 ಪರಿಹಾರಕ್ಕಾಗಿ ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸಲಾಗಿದ್ದು, ಕೊಡಗು ಜಿಲ್ಲೆಗೆ ಸಂಬಂಧಿಸಿದಂತೆ ನೋಂದಣಿಯಾದ ಅಸಂಘಟಿತ ಕಾರ್ಮಿಕರ ವಿವರ ಈ ಕೆಳಕಂಡಂತಿದೆ: |

| | | |
|---|---|---|
| | | <table><tr><td>ಯೋಜನೆ</td><td>ನೋಂದಾಯಿತ ಕಾರ್ಮಿಕರ ಸಂಖ್ಯೆ</td></tr><tr><td>ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ</td><td>7,326</td></tr><tr><td>ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ</td><td>4052</td></tr><tr><td>ಕೋವಿಡ್-19ರ ಒಂದು ಬಾರಿಯ ಪರಿಹಾರ ಕೋರಿ ಅರ್ಜಿ ಸಲ್ಲಿಸಿದ ಕಾರ್ಮಿಕರು</td><td>4,425</td></tr><tr><td>ಇ-ಶ್ರಮ್ ಕಾರ್ಯಕ್ರಮದಡಿ ನೋಂದಣಿಯಾದ ಅಸಂಘಟಿತ ಕಾರ್ಮಿಕರು.</td><td>18724</td></tr></table> |
| ಆ) | ಸದರಿ ನೋಂದಣಿಯಾಗಿರುವ ಕಾರ್ಮಿಕರು ಯಾವ್ಯಾವ ವಿವಿಧ ವಲಯಗಳಲ್ಲಿ ಎಷ್ಟು ಸಂಖ್ಯೆಯಲ್ಲಿ ದುಡಿಯುತ್ತಿದ್ದಾರೆ: (ವಲಯವಾರು ಅಂಕಿ-ಅಂಶಗಳನ್ನು ನೀಡುವುದು) | **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**<br>ಮಂಡಳಿಯಲ್ಲಿ ನೋಂದಯಿತ 8,700 ಕಾರ್ಮಿಕರು ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.<br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**<br>ರಾಜ್ಯ ಸರ್ಕಾರವು 43 ಅಸಂಘಟಿತ ಕಾರ್ಮಿಕ ವರ್ಗಗಳನ್ನು ಗುರುತಿಸಿದ್ದು, ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆಯಡಿ ಸಾರಿಗೆ ಇಲಾಖೆಯಿಂದ ಖಾಸಗಿ ವಾಣಿಜ್ಯ ವಾಹನ ಚಲಾಯಿಸಲು ಚಾಲನಾ ಪರವಾನಿಗೆಯನ್ನು ಪಡೆದ ಚಾಲಕರನ್ನು ಫಲಾನುಭವಿಯಾಗಿ ಪರಿಗಣಿಸಲಾಗುತ್ತಿದೆ ಹಾಗೂ ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆಯಡಿ 11 ವರ್ಗಗಳ ಅಸಂಘಟಿತ ಕಾರ್ಮಿಕ ವರ್ಗಗಳಾದ ಅಗಸರು, ಕ್ಷೌರಿಕರು, ಗೃಹಕಾರ್ಮಿಕರು, ಟೈಲರ್‌ಗಳು, ಮೆಕ್ಯಾನಿಕ್, ಚಿಂದಿ ಆಯುವವರು, ಹಮಾಲರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿಕಾರ್ಮಿಕರನ್ನು ಮಾತ್ರ ನೋಂದಾಯಿಸಲಾಗುತ್ತಿದ್ದು, ಸದರಿ ವರ್ಗಗಳ ಕಾರ್ಮಿಕರಿಗೆ ಕೋವಿಡ್-19ರ ನೆರವನ್ನು ವಿತರಿಸಲಾಗಿರುತ್ತದೆ. ಕೊಡಗು ಜಿಲ್ಲೆಗೆ ಸಂಬಂಧಿಸಿದಂತೆ ಸದರಿ ಕಾರ್ಮಿಕರ ವಲಯವಾರು ವಿವರಗಳನ್ನು ಅನುಬಂಧ-01 ರಲ್ಲಿ ಒದಗಿಸಿದೆ. |

| | | |
|---|---|---|
| | | ಕೇಂದ್ರ ಸರ್ಕಾರವು ಅಸಂಘಟಿತ ಕಾರ್ಮಿಕರ ದತ್ತಾಂಶವನ್ನು ಸಂಗ್ರಹಿಸುವ ಉದ್ದೇಶದಿಂದ ರಾಷ್ಟ್ರೀಯ ಅಸಂಘಟಿತ ಕಾರ್ಮಿಕರ ಸಮಗ್ರ ದತ್ತಾಂಶವನ್ನು ಸಿದ್ದಪಡಿಸಿ, ಅಸಂಘಟಿತ ಕಾರ್ಮಿಕರನ್ನು ಇ-ಶ್ರಮ್ ಪೋರ್ಟಲ್‌ನಲ್ಲಿ ನೋಂದಾಯಿಸಲಾಗುತ್ತಿದ್ದು, ಕೊಡಗು ಜಿಲ್ಲೆಗೆ ಸಂಬಂಧಿಸಿದಂತೆ ನೋಂದಣಿಯಾದ ಕಾರ್ಮಿಕರ ವಲಯವಾರು ವಿವರವನ್ನು ಅನುಬಂಧ-02 ರಲ್ಲಿ ಒದಗಿಸಿದೆ. |
| ಇ) | ಕಳೆದ ಎರಡು ವರ್ಷಗಳಿಂದ ಕೋವಿಡ್‌ನಿಂದಾಗಿ ಸಂಕಷ್ಟಕ್ಕೊಳಗಾಗಿರುವ ಎಷ್ಟು ಜನ ಕಾರ್ಮಿಕರಿಗೆ ಇಲಾಖೆ ಮೂಲಕ ಇದುವರೆಗೆ ನೆರವು ಒದಗಿಸಲಾಗಿದೆ: | **<u>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:</u>**<br>ರಾಜ್ಯಾದ್ಯಂತ ಕೋವಿಡ್-19 ರ ಒಂದನೇ ಆಲೆ ಮತ್ತು ಎರಡನೇ ಆಲೆಯಿಂದಾಗಿ ಸಂಕಷ್ಟಕೊಳಗಾದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಭದ್ರತೆಗಾಗಿ ಮಂಡಳಿಯ ವತಿಯಿಂದ ಈ ಕೆಳಕಂಡ ಪರಿಹಾರಗಳನ್ನು ನೀಡಲಾಗಿದೆ.<br>**ಒಂದನೇ ಆಲೆ ಸಂದರ್ಭದಲ್ಲಿ:**<br>1. ಮಾನ್ಯ ಮುಖ್ಯಮಂತ್ರಿಗಳ ಘೋಷಣೆಯಂತೆ 16,48,431 ಮಂಡಳಿಯ ಫಲಾನುಭವಿಗಳಿಗೆ ತಲಾ ರೂ.5,000/- ಗಳಂತೆ ಒಟ್ಟು ರೂ. 824.21ಕೋಟಿ ಸಹಾಯಧನವನ್ನು ನೇರವಾಗಿ ಫಲಾನುಭವಿಗಳ ಬ್ಯಾಂಕ್ ಖಾತೆಗಳಿಗೆ ಜಮಾ ಮಾಡಲಾಗಿರುತ್ತದೆ.<br>2. ಕಟ್ಟಡ ಮತ್ತು ವಲಸೆ ಕಟ್ಟಡ ಕಾರ್ಮಿಕರಿಗೆ 7.15 ಲಕ್ಷ ಆಹಾರ ಸಾಮಾಗ್ರಿಗಳ ಕಿಟ್‌ಗಳನ್ನು ವಿತರಿಸಲಾಗಿರುತ್ತದೆ.<br>3. ಕಟ್ಟಡ ಮತ್ತು ವಲಸೆ ಕಟ್ಟಡ ಕಾರ್ಮಿಕರಿಗೆ ಲಾಕ್‌ಡೌನ್ ಸಮಯದಲ್ಲಿ 89.87 ಲಕ್ಷ ಸಿದ್ಧಪಡಿಸಿದ ಆಹಾರದ ಪ್ಯಾಕೆಟ್ ಗಳನ್ನು ವಿತರಿಸಲಾಗಿರುತ್ತದೆ.<br>**ಎರಡನೇ ಅಲೆಯ ಸಂದರ್ಭದಲ್ಲಿ:**<br>1. ತಲಾ ರೂ.3,000/- ಗಳಂತೆ ಸುಮಾರು **19,02,018** ಕಾರ್ಮಿಕರಿಗೆ ಒಟ್ಟು **ರೂ.570.60** ಕೋಟಿ ಮೊತ್ತವನ್ನು ಫಲಾನುಭವಿಗಳ ಬ್ಯಾಂಕ್ ಖಾತೆಗೆ ನೇರ ನಗದು ವರ್ಗಾವಣೆ (DBT) ಮೂಲಕ ಜಮಾ ಮಾಡಲಾಗಿದೆ. ಉಳಿದ ಫಲಾನುಭವಿಗಳಿಗೆ ಬ್ಯಾಂಕ್‌ಖಾತೆಗೆ ರೂ. 3,000/- ಗಳನ್ನು ಜಮಾ ಮಾಡಲು ಕ್ರಮವಹಿಸಲಾಗುತ್ತಿದೆ. |

| | | |
|---|---|---|
| | | 2. ಮಂಡಳಿಯ ವತಿಯಿಂದ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಆಹಾರ ಸಮಸ್ಯೆಯನ್ನು ನೀಗಿಸಲು ರಾಜ್ಯಾದ್ಯಂತ 23.42 ಲಕ್ಷ ಕಾರ್ಮಿಕರಿಗೆ ಆಹಾರ ಸಾಮಾಗ್ರಿಗಳ ಕಿಟ್‌ಗಳನ್ನು ವಿತರಿಸಲಾಗಿದೆ.<br>3. ಮಂಡಳಿಯ ವತಿಯಿಂದ ನೋಂದಾಯಿತ ಅಸಂಘಟಿತ ಕಾರ್ಮಿಕರ ಆಹಾರ ಸಮಸ್ಯೆಯನ್ನು ನೀಗಿಸಲು ರಾಜ್ಯಾದ್ಯಂತ 3.80 ಲಕ್ಷ ಕಾರ್ಮಿಕರಿಗೆ ಆಹಾರ ಸಾಮಾಗ್ರಿಗಳ ಕಿಟ್‌ಗಳನ್ನು ವಿತರಿಸಲಾಗಿದೆ.<br>4. ನೋಂದಾಯಿತ ಅರ್ಹ 21.07 ಲಕ್ಷ ಕಾರ್ಮಿಕರಿಗೆ ಸುರಕ್ಷತಾ ಮತ್ತು ನೈರ್ಮಲ್ಯ ಕಿಟ್‌ಗಳನ್ನು ವಿತರಿಸಲಾಗಿದೆ.<br><br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**<br>ರಾಜ್ಯ ಸರ್ಕಾರವು ಕೋವಿಡ್-19 ರ ಕಾರಣ ಸಂಕಷ್ಟಕ್ಕೊಳಗಾದ ಅಸಂಘಟಿತ ಕಾರ್ಮಿಕರಿಗೆ, ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ ಮೂಲಕ ಒಂದು ಬಾರಿಯ ಪರಿಹಾರ ನೀಡಿದ್ದು ವಿವರ ಈ ಕೆಳಕಂಡಂತಿದೆ.<br>• ಕೋವಿಡ್-19ರ 2020ನೇ ವರ್ಷದ ಮೊದಲನೆ ಅಲೆಯ ಲಾಕ್‌ಡೌನ್ ಕಾರಣ ಸಂಕಷ್ಟಕ್ಕೊಳಗಾದ ಅಗಸ ಮತ್ತು ಕ್ಷೌರಿಕ ವೃತ್ತಿ ನಿರ್ವಹಿಸುತ್ತಿರುವ 1,24,968 ಕಾರ್ಮಿಕರಿಗೆ ಒಟ್ಟು ರೂ.62.48 ಕೋಟಿಗಳ ಪರಿಹಾರವನ್ನು ನೀಡಲಾಗಿದ್ದು, ಅವರಲ್ಲಿ ಕೊಡಗು ಜಿಲ್ಲೆಗೆ ಸಂಬಂಧಿಸಿದಂತೆ 588 ಅರ್ಹ ಕಾರ್ಮಿಕರಿಗೆ ಒಟ್ಟು ರೂ.29.40 ಲಕ್ಷ ನೆರವನ್ನು ವಿತರಿಸಲಾಗಿದೆ.<br>• ಕೋವಿಡ್-19ರ 2021ನೇ ವರ್ಷದ ಎರಡನೇ ಅಲೆಯ ಲಾಕ್‌ಡೌನ್ ಕಾರಣ ಸಂಕಷ್ಟಕ್ಕೊಳಗಾದ 11 ವರ್ಗಗಳಾದ ಅಸಂಘಟಿತ ಕಾರ್ಮಿಕರಾದ ಅಗಸರು, ಕ್ಷೌರಿಕರು, ಗೃಹಕಾರ್ಮಿಕರು, ಟೈಲರ್‌ಗಳು, ಮೆಕ್ಯಾನಿಕ್, ಚಿಂದಿ ಆಯುವವರು, ಹಮಾಲರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿಕಾರ್ಮಿಕರ ವೃತ್ತಿ ನಿರ್ವಹಿಸುತ್ತಿರುವ 11,89,490 ಕಾರ್ಮಿಕರಿಗೆ ತಲಾ ರೂ.2000/-ಗಳಂತೆ ಒಟ್ಟು ರೂ.237.89 ಕೋಟಿಗಳ ನೆರವನ್ನು ಪಾವತಿಸಲಾಗಿದ್ದು, ಅವರಲ್ಲಿ ಕೊಡಗು ಜಿಲ್ಲೆಗೆ ಸಂಬಂಧಿಸಿದಂತೆ 5501 ಅರ್ಹ ಕಾರ್ಮಿಕರಿಗೆ ಒಟ್ಟು ರೂ.1.10 ಕೋಟಿಗಳ ನೆರವನ್ನು ವಿತರಿಸಲಾಗಿದೆ |

| | | |
|---|---|---|
| ಈ) | ಜಿಲ್ಲೆಯಲ್ಲಿ ಸಂಕಷ್ಟದಲ್ಲಿರುವ ಕಾರ್ಮಿಕರಿಗೆ ಇದುವರೆಗೆ ಇಲಾಖೆ ಮೂಲಕ ಒದಗಿಸಲಾಗಿರುವ ಎಲ್ಲಾ ರೀತಿಯ ಸೌಲಭ್ಯ ನೆರವು ಹಾಗೂ ಸಹಾಯಗಳ ವಿವರಗಳೇನು? | **<u>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:</u>**<br>ಕಳೆದ ಎರಡು ವರ್ಷದಲ್ಲಿ ಕೋವಿಡ್ -19 ರ ಒಂದನೇ ಅಲೆ ಮತ್ತು ಎರಡನೆ ಅಲೆ ಸಂದರ್ಭದಲ್ಲಿ ಸಂಕಷ್ಟದಲ್ಲಿದ್ದ ಕೊಡಗು ಜಿಲ್ಲೆಯಲ್ಲಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಸಾಮಾಜಿಕ ಭದ್ರತೆಗಾಗಿ ಈ ಕೆಳಕಂಡ ಪರಿಹಾರ ನೀಡಲಾಗಿದೆ.<br>1. ಕೋವಿಡ್ 1 ನೇ ಅಲೆಯಲ್ಲಿ 1,727 ಕಟ್ಟಡ ಕಾರ್ಮಿಕ ಫಲಾನುಭವಿಗಳಿಗೆ ತಲಾ 5000/- ರಂತೆ ಒಟ್ಟು ರೂ.86,35,000/- ಗಳನ್ನು ನೇರವಾಗಿ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಜಮಾ ಮಾಡಲಾಗಿರುತ್ತದೆ.<br>2. ಕೋವಿಡ್ 2ನೇ ಅಲೆಯಲ್ಲಿ 2914 ಕಟ್ಟಡ ಕಾರ್ಮಿಕ ಫಲಾನುಭವಿಗಳಿಗೆ ತಲಾ 3000/- ರಂತೆ ಒಟ್ಟು ರೂ.87,42,000/- ಗಳನ್ನು ನೇರವಾಗಿ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಜಮಾ ಮಾಡಲಾಗಿರುತ್ತದೆ.<br>3. 7500 ಕಟ್ಟಡ ಕಾರ್ಮಿಕ ಫಲಾನುಭವಿಗಳಿಗೆ ಸುರಕ್ಷಾ ಕಿಟ್‌ಗಳನ್ನು ವಿತರಿಸಲಾಗಿರುತ್ತದೆ.<br>4. 1500 ಕಟ್ಟಡ ಕಾರ್ಮಿಕ ಫಲಾನುಭವಿಗಳಿಗೆ ಇಮ್ಯೂನಿಟಿ ಕಿಟ್‌ಗಳನ್ನು ವಿತರಿಸಲಾಗಿರುತ್ತದೆ.<br>5. 4500 ಕಟ್ಟಡ ಕಾರ್ಮಿಕ ಫಲಾನುಭವಿಗಳಿಗೆ ಆಹಾರ ಸಾಮಗ್ರಿಗಳ ಕಿಟ್‌ಗಳನ್ನು ವಿತರಿಸಲಾಗಿರುತ್ತದೆ.<br><br>ಮಂಡಳಿಯ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಮತ್ತು ಅವರ ಅವಲಂಭಿತರಿಗೆ ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಡಿ ಈ ಕೆಳಕಂಡ ಸೌಲಭ್ಯಗಳನ್ನು ವಿತರಿಸಲಾಗಿದೆ : |

| ಕ್ರ ಸಂ | ಸೌಲಭ್ಯ | ಸೌಲಭ್ಯ ಪಡೆದ ಫಲಾನುಭವಿಗಳ ಸಂಖ್ಯೆ | ಮೊತ್ತ (ರೂ.ಗಳಲ್ಲಿ) |
|---|---|---|---|
| 1 | ಶೈಕ್ಷಣಿಕ ಧನ ಸಹಾಯ | 2419 | 1,83,53,230/- |
| 2 | ಮದುವೆ ಧನ ಸಹಾಯ | 178 | 86,00,000/- |
| 3 | ಹೆರಿಗೆ ಧನ ಸಹಾಯ | 06 | 83,000/- |
| 4 | ವೈದ್ಯಕೀಯ ಧನ ಸಹಾಯ | 34 | 64,532 |
| 5 | ಪ್ರಮುಖ ವೈದ್ಯಕೀಯ ಧನ ಸಹಾಯ: | 17 | 7,06,065/- |

| | | | |
|---|---|---|---|
| 6 | ತಾಯಿ ಮಗು ಸಹಾಯ ಹಸ್ತ | 02 | 12,000/- |
| 7 | ಅಂತಿಮ ಸಂಸ್ಕಾರ ವೆಚ್ಚ | 64 | 23,12,000/- |
| ಒಟ್ಟು | | 7361 | 4,75,07,827/- |

**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**

ಕರ್ನಾಟಕ ಸರ್ಕಾರವು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ಕೋವಿಡ್-19ರ ಸಮಯದಲ್ಲಿ ಅಸಂಘಟಿತ ಕಾರ್ಮಿಕರಿಗೆ ಒದಗಿಸಲಾದ ನೆರವಿನ ವಿವರವನ್ನು ಉಪ ಪ್ರಶ್ನೆ (ಇ)ರಲ್ಲಿ ಒದಗಿಸಲಾಗಿದೆ. ಉಳಿದಂತೆ, ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸಲು ಮಂಡಳಿಯ ಮೂಲಕ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.

(1) ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:- ಸಾರಿಗೆ ಇಲಾಖೆಯಿಂದ ನೀಡುವ ಉರ್ಜಿತಾ ಖಾಸಗಿ ವಾಣಿಜ್ಯ ವಾಹನ ಚಾಲನಾ ಪರವಾನಗಿ ಹೊಂದಿದ ಎಲ್ಲಾ ಚಾಲಕರನ್ನು ಯೋಜನೆಯಡಿ ಫಲಾನುಭವಿಗಳೆಂದು ಪರಿಗಣಿಸಲಾಗಿದ್ದು, ಅವರಿಗೆ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.

(ಅ) ಅಪಘಾತ ಪರಿಹಾರ ಸೌಲಭ್ಯ : ಯೋಜನೆಯಡಿ, ಅಪಘಾತದಿಂದ ಮರಣ ಹೊಂದಿದ ಪ್ರಕರಣಗಳಲ್ಲಿ ರೂ. 5 ಲಕ್ಷದ ಪರಿಹಾರ, ಸಂಪೂರ್ಣ ಶಾಶ್ವತ ದುರ್ಬಲತೆ ಪ್ರಕರಣಗಳಲ್ಲಿ ರೂ.2 ಲಕ್ಷದ ಪರಿಹಾರ ಮತ್ತು ಒಳರೋಗಿಯಾಗಿ ಚಿಕಿತ್ಸೆ ಪಡೆದವರಿಗೆ ರೂ.1 ಲಕ್ಷದವರೆಗೆ ಚಿಕಿತ್ಸಾ ವೆಚ್ಚದ ಮರುಪಾವತಿ ನೀಡಲಾಗುತ್ತಿದೆ.

ಕೊಡಗು ಜಿಲ್ಲೆಯಲ್ಲಿ 03 ಫಲಾನುಭವಿಗಳಿಗೆ ರೂ.15,00,000/-ಗಳ ಪರಿಹಾರವನ್ನು ಒದಗಿಸಲಾಗಿದೆ.

(ಆ) ಶೈಕ್ಷಣಿಕ ಧನ ಸಹಾಯ : ಅಪಘಾತದಿಂದ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ ರೂ.10,000/-ಗಳ ಶೈಕ್ಷಣಿಕ ಸಹಾಯಧನ ನೀಡಲಾಗುತ್ತಿದೆ.

| | | |
|---|---|---|
| | | ಕೊಡಗು ಜಿಲ್ಲೆಯಲ್ಲಿ 06 ವಿದ್ಯಾರ್ಥಿಗಳಿಗೆ ರೂ.60,000/-ಗಳ ಶೈಕ್ಷಣಿಕ ದನಸಹಾಯ ಒದಗಿಸಲಾಗಿದೆ.<br><br>(2) **ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-**<br>ಈ ಯೋಜನೆಯಡಿ 11 ಅಸಂಘಟಿತ ವರ್ಗಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್‌ಗಳು, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ"ರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ಮಾತ್ರ ವಿತರಿಸಲಾಗುತ್ತಿದ್ದು, ಯಾವುದೇ ಆರ್ಥಿಕ ಸೌಲಭ್ಯಗಳನ್ನು ಒದಗಿಸಲಾಗುತ್ತಿಲ್ಲ. |

**ಕಾಇ 64 ಎಲ್‌ಇಟಿ 2022**

(ಅರಬೈಲ್ ಶಿವರಾಂ ಹೆಬ್ಬಾರ್)
**ಕಾರ್ಮಿಕ ಸಚಿವರು**

ಅನುಬಂಧ-01

ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ಎಸ್. ವೀಣಾ ಅಚ್ಚಯ್ಯ (ವಿಧಾನಸಭೆಯಿಂದ ಚುನಾಯಿತರದವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 267

ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:

| ವಲಯ/ಯೋಜನೆ | ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ | ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ | ಕೋವಿಡ್-19ರ ಒಂದು ಬಾರಿಯ ಪರಿಹಾರ ಕೋರಿ ಅರ್ಜಿ ಸಲ್ಲಿಸಿದ ಕಾರ್ಮಿಕರು |
|---|---|---|---|
| ಚಾಲಕರು | 7,326 | - | - |
| ಅಗಸರು | - | 41 | 293 |
| ಅಕ್ಕಸಾಲಿಗರು | - | 81 | 40 |
| ಕಮ್ಮಾರರು, | | 16 | 16 |
| ಕುಂಬಾರರು | - | 05 | 58 |
| ಕ್ಷೌರಿಕರು | - | 89 | 433 |
| ಚಿಂದಿ ಆಯುವವರು, | - | 215 | 13 |
| ಟೈಲರ್ಸ್ | - | 1890 | 2306 |
| ಭಟ್ಟಿ ಕಾರ್ಮಿಕ | - | 19 | 14 |
| ಮೆಕ್ಯಾನಿಕ್, | - | 200 | 292 |
| ಮನೆಗೆಲಸದವರು | - | 1279 | 910 |
| ಹಮಾಲರು | | 217 | 50 |
| ಒಟ್ಟು | 7,326 | 4052 | 4,425 |

ಅನುಬಂಧ-02

ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ಎಸ್. ವೀಣಾ ಅಚ್ಚಯ್ಯ
(ವಿಧಾನಸಭೆಯಿಂದ ಚುನಾಯಿತರದವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 267

ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:

| Category/Sector Wise registration(Karnataka) in E-shram portal at end of 13-02-2022 pertaining to Kodagu | | |
|---|---|---|
| Sl.No. | Occupation/Sector | No of Registrations |
| 1 | Agriculture | 7425 |
| 2 | Construction | 2741 |
| 3 | Apparel | 2342 |
| 4 | Automobile & Trasnportation | 1886 |
| 5 | Miscellaneous | 848 |
| 6 | Domestic and Hosehold Workers | 519 |
| 7 | Healthcare | 514 |
| 8 | Office Administration & Facility Management | 393 |
| 9 | Electronics & HW | 323 |
| 10 | Capital Goods & Manufacturing | 282 |
| 11 | Retail | 228 |
| 12 | Tourism & Hospitality | 208 |
| 13 | Beauty & Wellness | 192 |
| 14 | Professionals | 169 |
| 15 | Education | 165 |
| 16 | Printing | 113 |
| 17 | Food Industry | 96 |
| 18 | Leather Industry Works | 94 |
| 19 | Tobacco Industry | 38 |
| 20 | Wood & Carpentry | 25 |
| 21 | Handicrafts & Carpets | 22 |
| 22 | BFSI | 20 |
| 23 | Service | 19 |
| 24 | Gem & Jewellery | 18 |
| 25 | Private Security | 17 |
| 26 | Mining | 8 |
| 27 | Organised Retail | 8 |
| 28 | Others | 5 |
| 29 | Musical Instruments | 4 |
| 30 | Textile & Handloom | 2 |
| | Total | 18724 |